## Three Languages, Three Paradigms

ವಿದ್ಯಾರ್ಥಿ ವಾಣಿ

Voices of Students

**ಮೂರು ಭಾಷೆಗಳು ಮೂರು ಮಾದರಿಗಳು**

ಅಶ್ವಿನ್ ಶ್ರೀವತ್ಸ

ನನಗೆ ಮೂರು ಭಾಷೆಗಳ ಪರಿಚಯ ಸುಮಾರಾಗಿ ಇದೆ. ಅವು ಇಂಗ್ಲಿಷ್ , ತಮಿಳು ಹಾಗು ಜಪಾನೀಸ್ . ಇಂಗ್ಲಿಷ್ ನನ್ನ ಸ್ಥಳೀಯ ಭಾಷೆ - ನಾನು ಹುಟ್ಟಿದಾಗಿನಿಂದ ಅದನ್ನು ಮಾತನಾಡುತ್ತ ಬಂದಿದ್ದೇನೆ , ಹಾಗು ನನ್ನ ಶಾಲೆಯ ಬೋಧನಾ ಮಾಧ್ಯಮವು ಇಂಗ್ಲಿಷ್ ಆಗಿತ್ತು . ನನ್ನ ಮನೆಯಲ್ಲಿ ಮಾತನಾಡುವ ಭಾಷೆ ತಮಿಳು - ನನಗೆ ಆ ಭಾಷೆಯ ಶಾಸ್ತ್ರೀಯ ಬೋಧನೆಯಾಗಿಲ್ಲವಾದರೂ ವರ್ಷ ವರ್ಷ ಭಾರತಕ್ಕೆ ರಜೆ ಕಳೆಯಲು ಬಂದಾಗ ತಮಿಳು ಭಾಷೆಗೆ ತೆರೆದುಕೊಳ್ಳಲು ಸಾಕಷ್ಟು ಅವಕಾಶವಿರುತ್ತಿತ್ತು. ಜಪಾನೀಸ್ ಭಾಷೆ ಮಾತ್ರ ಇಂಗ್ಲಿಷ್ ಮತ್ತು ತಮಿಳಿನಂತಲ್ಲ, ಜಪಾನೀಸ್ ಭಾಷೆಯನ್ನು ಮಾತ್ರ ನಾನು ತರಗತಿಯಲ್ಲೇ ಕಲಿತಿದ್ದು. ನನ್ನ ಬೌದ್ಧಿಕ ವಿಕಾಸಕ್ಕೆ ಈ ಮೂರೂ ಭಾಷೆಗಳು ಬೇರೆ ಬೇರೆ ರೀತಿಯಲ್ಲಿ ಕಾರಣವಾಗಿವೆ ಮತ್ತು ಇಲ್ಲಿ ಈ ಮೂರೂ ಭಾಷೆಗಳೊಂದಿಗಿನ ನನ್ನ ಅನುಭವವನ್ನು ಹಂಚಿಕೊಳ್ಳಲು ಯತ್ನಿಸುತ್ತೇನೆ.

ಇಂಗ್ಲಿಷ್ ಭಾಷೆ ನನಗೆ ಹೊಸತೇನಲ್ಲ. ನಾನು ಅಮೆರಿಕಾದಲ್ಲಿ ಹುಟ್ಟಿ ಬೆಳೆದವನಾದ್ದರಿಂದ ಚಿಕ್ಕವನಿದ್ದಾಗಿಂದಲೇ ಆ ಭಾಷೆಗೆ ಸಾಕಷ್ಟು ತೆರೆದುಕೊಂಡಿದ್ದೇನೆ . ನಾನು ಇಂಗ್ಲಿಷ್ ಭಾಷೆಯಲ್ಲಿ ಉತ್ತಮವಾಗಿ ಮಾತನಾಡಬಲ್ಲೆ, ಬರೆಯಬಲ್ಲೆ ಮತ್ತು ಆ ಭಾಷೆಯನ್ನು ಚೆನ್ನಾಗಿ ಓದಬಲ್ಲೆ ಎಂದು ಭಾವಿಸಿದ್ದೇನೆ. ಸಹಜವಾಗಿಯೇ ಇದಕ್ಕೆ ಅನೇಕ ಅಂಶಗಳು ಕಾರಣೀಭೂತವಾಗಿವೆ. ಕೇವಲ ಯಾವುದೇ ಒಂದು ಶೈಕ್ಷಣಿಕ ಕ್ರಮದಿಂದ ಇಂಗ್ಲಿಷ್ ಭಾಷೆಯ ಮೇಲೆ ಇಂಥ ಒಂದು ಪ್ರಭುತ್ವ ಸಾಧ್ಯವಾದದ್ದು ಎಂದು ನನಗೆ ಅನಿಸುವುದಿಲ್ಲ . ಚೋಟುದ್ದ ಇದ್ದಾಗಿನಿಂದ ಇಂಗ್ಲಿಷ್ ಭಾಷೆಯೊಡನೆ ನನ್ನ ಸಾಂಗತ್ಯ ಶುರುವಾಯಿತು – ನಾನು ಚಿಕ್ಕವನಿದ್ದಾಗ ನನ್ನ ತಂದೆ ತಾಯಿಗಳು ಆಗಾಗ್ಗೆ ಇಂಗ್ಲಿಷ್ ಅನ್ನು ನನಗೆ ಓದಿ ಹೇಳುತ್ತಿದ್ದರು. ಇದರಿಂದ ನನಗೆ ಇಂಗ್ಲಿಷ್ ನಲ್ಲಿ ಒಂದು ಗಟ್ಟಿ ತಳಹದಿ ಸಿಕ್ಕಂತಾಗಿ ಮುಂದೆ ಅದರ ಮೂಲಕ ನನ್ನ ಭಾಷಾ ಜ್ಞಾನವನ್ನು ವಿಸ್ತರಿಸಲು ಬಹಳ ಅನುಕೂಲವಾಯಿತು.

ನನ್ನ ಶಾಲಾ ಶಿಕ್ಷಣ ವ್ಯವಸ್ಥಿತವಾಗಿ ಶುರುವಾಗುವುದಕ್ಕೂ ಮುಂಚೆ - ನನಗೆ ಐದು ವರ್ಷಗಳಾಗುವ ಮುನ್ನವೇ - ನಾನು ಪುಸ್ತಕಗಳಿಂದ ಹಿಡಿದು , ಜಾಹೀರಾತು ಫಲಕಗಳು , ದೂರದರ್ಶನ , ಸಹಜ ಸಂಭಾಷಣೆಗಳು.. ಮತ್ತು ಎಲ್ಲಿಯವರೆಗೆಂದರೆ ವಾಹನದ ಲೈಸೆನ್ಸ್ ಫಲಕಗಳವರೆಗಿನ ಇಂಗ್ಲಿಷ್ ಭಾಷೆಯ ನಾನಾ ವೈವಿಧ್ಯಮಯ ಮಾದರಿಗಳಿಗೆ ತೆರೆದುಕೊಂಡಿದ್ದೆ . ಇಂಗ್ಲೀಷ್ ಭಾಷೆಯೊಡನೆ ಇಂಥ ಹಲವಾರು ಮೂಲಗಳಿಂದಾದ ಸಂವಾದವೇ ನನ್ನ ಬೆಳವಣಿಗೆಗೆ ಸಹಾಯಕಾರಿಯಾಯಿತು ಎಂಬುದನ್ನು ನಾನು ಬಲವಾಗಿ ನಂಬಿದ್ದೇನೆ . ಹೀಗೆ ನನ್ನ ಸುತ್ತಮುತ್ತಲಿನ ಪರಿಸರದಿಂದ ಸಾಕಷ್ಟು ಮಾಹಿತಿಯನ್ನು ಪಡೆದುಕೊಳ್ಳುವ ಮೂಲಕ ನಾನು ಪ್ರಾಥಮಿಕ ಶಾಲಾ ಶಿಕ್ಷಣದಿಂದ ಶುರುವಾದ ನನ್ನ ವ್ಯವಸ್ಥಿತ ಶಿಕ್ಷಣದ ಮೊದಲ ಹಂತಕ್ಕೆ ತಯಾರಾಗಿಬಿಟ್ಟಿದ್ದೆ .

ಅಂಗನವಾಡಿಯ (ಕಿಂಡರ್‌ಗಾರ್ಟನ್) ಪ್ರವೇಶದೊಂದಿಗೆಯೇ ನನಗೆ ಇಂಗ್ಲಿಷ್ ನ ವ್ಯವಸ್ಥಿತ ಶಿಕ್ಷಣ ಶುರುವಾಯಿತು . ಕಾಲಾವಧಿಯಲ್ಲಿ ಇಂಗ್ಲಿಷ್ ಭಾಷೆಯ ಕಲಿಕೆಯು ನಿಧಾನವಾಗಿ ಆ ಭಾಷೆಯ ಯಾಂತ್ರಿಕ ಅಂಶಗಳನ್ನು ಕಲಿಯುವುದರಿಂದ ಪಲ್ಲಟಗೊಂಡು ಇಂಗ್ಲಿಷ್ ಭಾಷಾ ಸಾಹಿತ್ಯದ ವಿಶ್ಲೇಷಣೆಯನ್ನು ಮಾಡುವುದರ ಮೇಲೆ ಕೇಂದ್ರೀಕೃತವಾಯಿತು . ಒಂದು ಭಾಷೆಯ ಯಾಂತ್ರಿಕ ಅಂಶವು ಅದರ ವಿಶ್ಲೇಷಣಾ ಅಂಶದಿಂದ ಬೇರೆಯಾಗಿ ನಿಲ್ಲುವುದಿಲ್ಲ . ಇಂಗ್ಲಿಷ್ ಭಾಷೆಯ ಯಾಂತ್ರಿಕ ಅಂಶದ ಭದ್ರ ಬುನಾದಿ ಇದ್ದರಷ್ಟೇ ಅದರ ಸಂಕೀರ್ಣ ವಿಶ್ಲೇಷಣೆಗಳು ಸಾಧ್ಯವಾಗುವುದು.

ಅದರಂತೆಯೇ ಸಂಕೀರ್ಣ ವಿಶ್ಲೇಷಣೆಯ ಸಹಾಯದಿಂದ ಆ ಭಾಷೆಯ ಯಾಂತ್ರಿಕ ಅಂಶಗಳನ್ನು ಆಸ್ವಾದಿಸಲು ಸಾಧ್ಯವಾಗುತ್ತದೆ . ಕಲಿಕೆಯ ಈ ಎರಡು ಅಂಶಗಳ ಸಂಯೋಗದ ಪರಿಣಾಮವೇ ನನ್ನ ಇಂಗ್ಲಿಷ್ ಭಾಷಾರ್ಜನೆಗೆ ವಿಶೇಷ ಮೌಲ್ಯವನ್ನು ಕೊಟ್ಟಿವೆ.

ನನ್ನ ಇಂಗ್ಲಿಷ್ ಭಾಷಾರ್ಜನೆಯ ಯಾತ್ರೆಯ ಕಟ್ಟಕಡೆಯ ಹಾಗು ಬಹಳ ಪ್ರಮುಖ ಅಂಗವೆಂದರೆ ಇಂಗ್ಲಿಷ್ ಓದಿನ ವಿಷಯದಲ್ಲಿ ನನ್ನ ತೀರಿಸಲಾಗದ ದಾಹ . ಎಳವೆಯಲ್ಲಿ ಇಂಗ್ಲಿಷ್ ಕಲಿತಾಗಿನಿಂದ ನನಗೆ ಇಂಗ್ಲೀಷ್ ಬರಹವನ್ನು ಅಭ್ಯಸಿಸಬೇಕೆಂಬ ತುಡಿತವಿತ್ತು . ನನ್ನ ಜೀವನದ ಕೆಲವು ಹಂತಗಳಲ್ಲಿ ನನ್ನ ಲಕ್ಷ್ಯವೆಲ್ಲ ಕೇವಲ ಜಗತ್ತಿನ ಪ್ರಮುಖ ವ್ಯಕ್ತಿ, ಘಟನೆ, ಮೊದಲಾದವುಗಳ ವಿವರಗಳನ್ನು ಪ್ರಕಟಿಸುವ ಪುಸ್ತಕ(almanac) ಹಾಗು ವಿಶ್ವಕೋಶಗಳತ್ತಲೇ ಇತ್ತು . ಉಳಿದ ಸಮಯವೆಲ್ಲ ನನ್ನ ಮನಸ್ಸು ವಿಲಕ್ಷಣವಾದ ಕಾಲ್ಪನಿಕ ಸಾಹಸೀ ಕಥೆಗಳಲ್ಲಿ ಮುಳುಗಿರುತ್ತಿತ್ತು . ನಾನು ಏನೇ ಓದಿದರೂ ಪ್ರತಿ ದಿನ ಹೊಸ ಪದಗಳ ಪರಿಚಯದ ಮೂಲಕ ಇಲ್ಲವೇ ಅನನ್ಯವಾದ ಪದ ಪ್ರಯೋಗಗಳ ಅಧ್ಯಯನದ ಮೂಲಕ ನನ್ನ ಇಂಗ್ಲಿಷ್ ಭಾಷಾಜ್ಞಾನವು ವಿಸ್ತಾರಗೊಳ್ಳುತ್ತಾ ಹೋಗುತ್ತಿತ್ತು.

ಶಾಲಾ ಪಠ್ಯದ ಬೋಧನೆಯೊಂದಿಗೆ , ತಂದೆ ತಾಯಿಗಳ ಸಹಾಯ ಹಾಗು ಸ್ವಂತ ಕುತೂಹಲದಿಂದ ಉಂಟಾದ ಇಂಗ್ಲಿಷ್ ಕಲಿಕೆಯ ಈ ಸಮಗ್ರ ರೀತಿಯೇ ಇಂದು ಆ ಭಾಷೆಯ ಮೇಲಿರುವ ನನ್ನ ಪ್ರಭುತ್ವಕ್ಕೆ ಕಾರಣವಾಗಿದೆ. ಇಂಗ್ಲಿಷ್ ಭಾಷೆಯೊಡನೆಯ ನನ್ನ ಅನುಭವವು ಸಂಪೂರ್ಣ ಸಾಕಾರಗೊಂಡ ಸಾಮರ್ಥ್ಯದ್ದಾಗಿದೆ - ಸರಿಯಾದ ಕಾರ್ಯವಿಧಾನದಿಂದ ಗಳಿಸಲ್ಪಡುವ ಮಹಾಜ್ಞಾನದ ಉದಾಹರಣೆಯಾಗಿದೆ . ಹಾಗಾಗಿಯೇ ಎಲ್ಲವನ್ನೂ ಒಳಗೊಂಡಂಥ ಹಾಗೂ ಪರಿಣಾಮಕಾರೀ ಇಂಗ್ಲಿಷ್ ಕಲಿಕೆಯ ( ಇನ್ನೂ ಕಲಿಯುತ್ತಿರುವ ) ಈ ಮಾದರಿಯನ್ನೇ ನಾನು ನನ್ನ ಸ್ವಂತ ಶಿಕ್ಷಣಕ್ಕೂ ಬಳಸಿಕೊಳ್ಳುತ್ತೇನೆ .

ಇಂಗ್ಲಿಷ್ ಭಾಷೆಯ ಬಗ್ಗೆ ಇಷ್ಟೆಲ್ಲಾ ಹೇಳಬಲ್ಲ ನಾನು ತಮಿಳಿನ ಬಗ್ಗೆ ಇದನ್ನೇ ಹೇಳಲಾರೆ - ತಮಿಳನ್ನು ಓದುವುದಕ್ಕೂ ಬರೆಯುವುದಕ್ಕೂ ನನಗೆ ಬರುವುದಿಲ್ಲ ಹಾಗು ನನಗಿರುವ ತಮಿಳು ಭಾಷೆಯ ಗ್ರಹಣಶಕ್ತಿ ತೀರಾ ಪ್ರಾಥಮಿಕ ಹಂತದ್ದು . ನನ್ನ ತಂದೆ ತಾಯಿಗಳು ನನ್ನೊಂದಿಗೆ ಯಾವಾಗಲೂ ಕೊಂಚವಾದರೂ ತಮಿಳು ಮಾತಾಡುತ್ತ ಬಂದಿದ್ದಾರಾದರೂ ನನಗಿರುವ ತಮಿಳು ಜ್ಞಾನ' ಅಲ್ಲಿಗೇ ಮುಗಿಯುತ್ತದೆ . ಇಂಗ್ಲಿಷ್ ಭಾಷೆಯೊಡನೆ ನನ್ನ ನಿರಂತರವಾದ ಒಡನಾಟವಿದ್ದು ಆ ಭಾಷಾಜ್ಞಾನದ ಬೆಳವಣಿಗೆಯೂ ಊರ್ಧ್ವಮುಖವಾಗಿ ಚಲಿಸುತ್ತಿದ್ದದ್ದು ಹೌದು , ಆದರೆ ಅದೇ ಅನುಭವ ತಮಿಳಿನೊಡನೆ ನನಗಾಗಲಿಲ್ಲ. ತಮಿಳು ಪ್ರಕಾಶನದ ಪುಸ್ತಕಗಳ ಪರಿಚಯವೇ ನನಗಿರಲಿಲ್ಲ , ಇತರ ತಮಿಳು ಮಾತಾಡುವವರೊಂದಿಗೆ ನನ್ನ ಒಡನಾಟವೂ ಇರಲಿಲ್ಲ ಹಾಗು ತಮಿಳು ಕಲಿಯಲು ಯಾವ ಅಗತ್ಯವೂ, ಪ್ರಾಯೋಗಿಕ ಕಾರಣವೂ ನನಗೆ ಕಂಡುಬರಲಿಲ್ಲ. ಸಂಬಂಧಿಕರೊಡನೆ ರಜೆ ಕಳೆಯಲು ಭಾರತಕ್ಕೆ ಬಂದಾಗಲೂ ಒಂದೇ ಒಂದು ತಮಿಳು ಶಬ್ದ ಮಾತನಾಡದೆಯೂ ವ್ಯವಹಾರ ನಡೆದುಬಿಡುತ್ತಿತ್ತು.

ತಮಿಳು ಕಲಿಯಬೇಕಾದ ಯಾವ ಅಗತ್ಯವೂ ನನಗಿರಲಿಲ್ಲ. ನನ್ನ ತಂದೆ ತಾಯಿಗಳು ನಾನು ತಮಿಳನ್ನು ಹೆಚ್ಚು ಹೆಚ್ಚು ಉಪಯೋಗಿಸಬೇಕೆಂಬ ಆಸೆಯನ್ನು ವ್ಯಕ್ತಪಡಿಸುತ್ತಿದ್ದರಾದರೂ ನಾನು ತಮಿಳು ಕಲಿಯುವ ಕೌಶಲ್ಯಕ್ಕೆ ಬೇಕಾದ ಯಾವ ಪ್ರಯತ್ನವನ್ನೂ ಮಾಡುವ ಗೋಜಿಗೆ ಹೋಗಲಿಲ್ಲ . ಇಂದು ನಾನು ಒಂದು ಭಾಷೆಯ ಕಲಿಕೆಯನ್ನು ಒಂದು ಬೌದ್ಧಿಕ ಅನ್ವೇಷಣೆಯನ್ನಾಗಿ ಅರ್ಥೈಸುತ್ತೇನಾದರೂ ಆಗ, ಆ ಎಳವೆಯಲ್ಲಿ ಅಂಥ ಪ್ರೌಢ ಆಲೋಚನೆ ನನ್ನದಾಗಿರಲಿಲ್ಲ . ಮೂಲ ಸೌಕರ್ಯಗಳ ಕೊರತೆಯಿಂದಾಗಿಯೂ , ತಕ್ಕ ಉತ್ತೇಜನದ ಕೊರತೆಯಿಂದಾಗಿಯೂ ನಾನು ಎಂದೂ ತಮಿಳನ್ನು ಸುಶಿಕ್ಷಿತವಾಗಿ ಕಲಿಯಲಾಗದಿದ್ದರೂ ತಮಿಳನ್ನು ಕಲಿಯಲು ಈಗಲೂ ನನಗೆ ಯಾವ ಅಡೆತಡೆಯೂ

ಇಲ್ಲ . ನನಗೆ ತಮಿಳು ಭಾಷೆ , ಏನೋ ಆಗಬಹುದಾಗಿದ್ದ ಆದರೆ ಕಾರಣಾಂತರಗಳಿಂದ ಆಗದೇ ಹೋದ ಸಾಧ್ಯತೆಯೊಂದರ ಉದಾಹರಣೆಯಾಗಿ ತೋರುತ್ತದೆ.

ಜಪಾನೀಸ್ ಭಾಷೆಯನ್ನು ನಾನು ಕಲಿತ ರೀತಿ ಮಾತ್ರ ಇಂಗ್ಲಿಷ್ ಮತ್ತು ತಮಿಳು ಭಾಷೆ ಕಲಿತ ಅನುಭವಗಳೆರಡರ ಮಧ್ಯದ, ಕೆಲವು ವಿಷಯಗಳಲ್ಲಿ ವಿಶಿಷ್ಟವಾದ ದಾರಿ . ನನಗೆ ತಿಳಿದಿರುವಂತೆ ನನ್ನ ಕುಟುಂಬದಲ್ಲಿ ಪ್ರಾಥಮಿಕ ಜಪಾನೀಸ್ ಭಾಷೆ ಮಾತಾಡಲು ಕಲಿತವನೆಂದರೆ ನಾನೊಬ್ಬನೇ . ಇದೇ ಕಾರಣದಿಂದ ನನ್ನ ಶಾಲೆಯ ಏಳನೆಯ ತರಗತಿಯಲ್ಲಿ ಮೊದಲ ಬಾರಿಗೆ ಜಪಾನೀಸ್ ಭಾಷೆ ಕಲಿಯುವ ಅವಕಾಶ ಸಿಕ್ಕಾಗ ನನಗೆ ಆ ಭಾಷೆಯ ಅಲ್ಪ ಪರಿಚಯವೂ ಇರಲಿಲ್ಲ . ಜಪಾನೀಸ್ ತರಗತಿಯನ್ನು ಪ್ರವೇಶಿಸುವಾಗ ಏನನ್ನು ನಿರೀಕ್ಷಿಸುವುದೆಂದಾಗಲೀ, ಆ ಭಾಷೆ ಹೇಗೆ ಇರುತ್ತದೆ ಎಂಬ ಪೂರ್ವಜ್ಞಾನವಾಗಲೀ, ಆ ತರಗತಿಯಿಂದ ನಾನು ಏನನ್ನು ಕಲಿಯುತ್ತೇನೆಂದಾಗಲೀ ನನಗೆ ತಿಳಿದಿರಲಿಲ್ಲ. ಕಳೆದ ನಾಕೂವರೆ ವರ್ಷದಿಂದ ಈ ಭಾಷೆಯನ್ನು ತರಗತಿಯಲ್ಲಿ ಕಲಿತುದಲ್ಲದೆ, ಅದರ ಕಲಿಕೆಯಿಂದಾಗಿ ನನ್ನ ಬೌದ್ಧಿಕ ಸಾಮರ್ಥ್ಯ ನನ್ನ ಊಹೆಗೂ ಮೀರಿ ವಿಸ್ತಾರಗೊಂಡಿದೆ ಎಂಬುದನ್ನು ನಾನು ಭರವಸೆಯಿಂದ ಹೇಳಬಲ್ಲೆ. ಅದರಿಂದ ನನಗೆ ಅನನ್ಯ ಸಂಸ್ಕೃತಿಯುಳ್ಳ ಜಪಾನೀ ಸಮಾಜದ ಇಣುಕುನೋಟ ಸಿಕ್ಕಿದ್ದಲ್ಲದೆ ನನ್ನ ಕಲಿಕೆಯ ರೀತಿಯನ್ನು ಅದು ಬಹಳ ಪ್ರಭಾವಿಸಿದೆ . ಅಲ್ಲಿ ಕಂಡುಬಂದ ಬೋಧನಾ ವಿಧಾನವನ್ನು ನನಗೆ ಬೇರೆ ವಿಷಯಗಳ ತರಗತಿಗಳಲ್ಲಿ ಪ್ರಯೋಗಿಸಲು ಸಾಧ್ಯವಾಗಿ , ಖಂಡಿತವಾಗಿಯೂ ನನ್ನೆಲ್ಲ ಕಲಿಕೆಯ ಸಾಮರ್ಥ್ಯವನ್ನು ಅದು ಹೆಚ್ಚಿಸಿದೆ .

ನನ್ನ ಶಾಲೆಯ ಜಪಾನೀ ಭಾಷಾ ಪಠ್ಯಕ್ರಮವು, ಬೇರೆ ವಿದೇಶೀ ಭಾಷಾ ಪಠ್ಯಕ್ರಮಗಳಿಗಿಂತ ಭಿನ್ನವಾಗಿದೆ. ಅದು ಭಾಷೆಯ ಯಾಂತ್ರಿಕ ಅಂಶಗಳ ಬೋಧನೆಯನ್ನಷ್ಟೇ ಅಲ್ಲ , ಅದು ಜಪಾನೀಸ್ ಭಾಷೆಯು ಐತಿಹಾಸಿಕ ಜಪಾನೀ ಸಮಾಜಕ್ಕೂ , ಸಮಕಾಲೀನ ಜಪಾನೀ ಸಂಸ್ಕೃತಿಗೂ ಹೇಗೆ ಅನ್ವಯಿಸುತ್ತದೆ ಎಂಬುದರ ಬೋಧನೆಯನ್ನು ಒಳಗೊಂಡಿರುತ್ತದೆ.

ಶುರುವಿನಿಂದ , ನಾವು ಕಲಿಯುತ್ತಿದ್ದ ಹೊಸ ಪದಜೋಡಣೆಗಳು ಮಹತ್ವಪೂರ್ಣವಾಗಿ ನೆನಪಿಟ್ಟುಕೊಳ್ಳಲು ಹಾಗು ನನ್ನ ಜೀವನದಲ್ಲಿ ಅನ್ವಯಿಸಲು ಬಹಳವಾಗಿ ಅನುಕೂಲವಾಗುವಂತಹ ಸಂದರ್ಭಗಳಲ್ಲಿ ಇಡಲ್ಪಡುತ್ತಿದ್ದವು. ತರಗತಿ ಶುರುವಾದ ಕೆಲವೇ ವಾರಗಳೊಳಗೇ "ಬ್ರೆಡ್ ಎಲ್ಲಿದೆ?" ಎಂಬಂಥ ಪ್ರಶ್ನೆಗಳನ್ನೂ ಕೇಳಲೂ ಅದನ್ನು ಉತ್ತರಿಸಲೂ ನಾವು ಕಲಿತುಕೊಂಡೆವು . ಈ ಮಾಹಿತಿಯೊಂದಿಗೇ ಗಿರಾಕಿಯೊಂದಿಗೆ ಕಿರಾಣಿ ಅಂಗಡಿಯ ಗುಮಾಸ್ತನೊಬ್ಬನ ಸಂವಾದದ ವಿಡಿಯೋ ಒಂದನ್ನು ನಮಗೆ ತೋರಿಸಲಾಯಿತು . ಅದರಲ್ಲಿ ಗಿರಾಕಿಯು ಒಂದು ನಿರ್ದಿಷ್ಟ ತಿನಿಸು ಎಲ್ಲಿದೆ ಎಂದು ಕೇಳುತ್ತಾನೆ ಹಾಗು ಗುಮಾಸ್ತನು ಅದು ಇಂಥಲ್ಲಿದೆ ಎಂದು ನಿರ್ದೇಶಿಸುತ್ತಾನೆ . ಈ ಎಲ್ಲವೂ ಶುದ್ಧ ಜಪಾನೀ ಭಾಷೆಯಲ್ಲಿಯೇ ನಡೆಯುತ್ತದೆ. ನಾವು ಆಗಿನ್ನೂ ಕಲಿತಿದ್ದ ವ್ಯಾಕರಣ ರಚನೆಯು ನಿಜಜೀವನದಲ್ಲಿ ಅನ್ವಯವಾಗುವ ಈ ಉದಾಹರಣೆಯು ನನ್ನ ಮನಸ್ಸಿನಲ್ಲಿ ಗಟ್ಟಿಯಾಗಿ ಬೇರೂರುವಂತೆ ಮಾಡಿತು .

ಭಾಷೆಯ ಅಂಶಗಳು ನಿಧಾನವಾಗಿ ಅಮೂರ್ತವಾಗತೊಡಗಿದರೂ ಹಲವಾರು ವರ್ಷ ಈ ಪ್ರಕ್ರಿಯೆಯು ಹೀಗೇ ಮುಂದುವರಿಯುತ್ತಾ ಬಂತು . ಉದಾಹರಣೆಗೆ' ಜಪಾನೀಸ್ ಭಾಷೆಯು ಗೌರವಸೂಚಕ ಪದಗಳಿಗೆ ಬಹಳ ಒತ್ತು ಕೊಡುವಂಥ ಭಾಷೆ . ಹಾಗಾಗಿಯೇ ಜಪಾನೀ ಸಮಾಜದಲ್ಲಿ ಕಾರ್ಯನಿರ್ವಹಿಸಲು ಸರಿಯಾದ ಸಂದರ್ಭಗಳಲ್ಲಿ ಸರಿಯಾದ ಪದಗಳನ್ನು ಬಳಸಲು ಬರುವುದು ಅತ್ಯವಶ್ಯಕವಾಗಿದೆ . ಅದರ ಗೌರವಸೂಚಕ ಪರಿಭಾಷಾ ಶಾಸ್ತ್ರವನ್ನು ಪೂರ್ತ ಅಮೂರ್ತವಾಗಿ ಬಿಂಬಿಸದೇ ನಮಗೆ ಆಯಾ ಸಂದರ್ಭಕ್ಕೆ ಹೊಂದುವಂಥ ಪದಗಳ ಬಳಕೆಯನ್ನು ಕೆಲವೊಮ್ಮೆ ವಿಡಿಯೋಗಳ ಮೂಲಕ ಇನ್ನು ಕೆಲವೊಮ್ಮೆ ಕಿರುನಾಟಕಗಳ ಮೂಲಕ ತಿಳಿಸಲಾಯಿತು .

ನನ್ನ ಜಪಾನೀ ಭಾಷೆಯ ಕಲಿಕೆಯುದ್ದಕ್ಕೂ ಭಾಷೆಗೂ ಅದರ ಸಾಮಾಜಿಕ ಪ್ರಭಾವಕ್ಕೂ ಇರುವ ಕಾರ್ಯಸಾಧ್ಯ ನಂಟನ್ನು ಪದೇ ಪದೇ ಬಲಪಡಿಸಿದ್ದರಿಂದ ನಾನು ಕಲಿತದ್ದು ನೆನಪಿನಲ್ಲಿ ಉಳಿಯುವಂತಾಯಿತು . ಜಪಾನೀ ಭಾಷೆಯನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾದ್ದರಿಂದ ಆ

ಸಮಾಜದಲ್ಲಿ ವ್ಯವಹರಿಸಲು ಆಗುವಂಥ ತಕ್ಷಣದ ಪರಿಣಾಮದ ಜೊತೆಗೆ ಜಪಾನೀ ಭಾಷೆಯ ಕಲಿಕೆಯು ನನಗೆ ಹೊಸ ದಿಕ್ಕಿನಲ್ಲಿ ಯೋಚಿಸಲೂ ಕಲಿಸಿದೆ . ನನಗೆ ತೀರಾ ಪರಿಚಿತವಾದ ಇಂಗ್ಲಿಷ್ ಭಾಷೆ ಹಾಗೂ ಹಿಂದೊಮ್ಮೆ ಅಪರಿಚಿತವಾಗಿದ್ದ ಜಪಾನೀಸ್ ಭಾಷೆಯ ನಡುವೆ ಸಾದೃಶ್ಯಗಳನ್ನು ಮೂಡಿಸಲೂ , ಜಪಾನೀ ಸಮಾಜದ ಪ್ರತಿ ಅಂಶವೂ ಭಾಷೆಯೊಡನೆ ಹೇಗೆ ವ್ಯವಹರಿಸುತ್ತದೆ ಎಂಬುದನ್ನು ಗ್ರಹಿಸುವ ಮೂಲಕ ಆ ಸಮಾಜದ ಸಂಕೀರ್ಣತೆಗಳನ್ನು ಅರಿಯಲು ನನಗೆ ಸಾಧ್ಯವಾಯಿತು . ಜಪಾನೀ ಭಾಷೆಯ ಕಲಿಕೆಯು ನನಗೆ ಬರಹದ ಬಗೆಗೆ ಹೊಸತಾಗಿ ಯೋಚಿಸಲು ಕಲಿಸಿದೆ. ಅದರ ಲಿಪಿಯು ಎಲ್ಲರಿಗೂ ಪರಿಚಿತವಾಗಿರುವ ವರ್ಣಮಾಲೆಯ ವ್ಯವಸ್ಥೆಯಂತಿಲ್ಲದೇ ಉಚ್ಚಾರಾಂಶ( syllable) ಆಧಾರಿತವಾಗಿಯೂ ಹಾಗೂ ಚಿತ್ರಲಿಪಿಗಳಿಂದಲೂ ಕೂಡಿದ್ದು(pictographic) , ಬರಹದ ಪ್ರಕ್ರಿಯೆಯ ಬಗೆಗೆ ನೂತನ ದೃಷ್ಟಿಕೋನವನ್ನು ಕೊಟ್ಟಿದೆ. ಹೊಸ ಭಾಷೆಯೊಂದನ್ನು ಕಲಿಯುವುದರಿಂದ ಮೇಲೆ ತಿಳಿಸಿದ ಪ್ರಯೋಜನವೇ ಆಗಬೇಕೆಂದಿಲ್ಲ. ಆದರೆ ಯಾವ ಭಾಷೆ ಕಲಿತರೂ ಅದರಿಂದ ಕೆಲವು ಪರೋಕ್ಷ ಪ್ರಯೋಜನಗಳು ಖಂಡಿತಾ ಆಗುತ್ತವೆ .

ನಾನು ಕಲಿತ ಭಾಷೆಗಳನ್ನು ಮರಳಿ ನೋಡಿದಾಗ ಪ್ರತಿಯೊಂದು ಭಾಷೆಯನ್ನೂ ವಿಶಿಷ್ಟವಾಗಿ ಚಿತ್ರಿಸುವುದು ಸಾಧ್ಯ. ಉದಾಹರಣೆಗೆ ಇಂಗ್ಲಿಷ್ ನನ್ನ ಜೀವನದಿಂದ ಪ್ರತ್ಯೇಕಿಸಲಾಗದಂತಿದ್ದು ಅದು ನನ್ನ ಜೀವನ ರೀತಿಯೊಳಗೆ ಅಂತರ್ಗತವಾಗಿದೆ. ನಾನು ಇಂಗ್ಲಿಷ್ ಅನ್ನು ತರಗತಿಯಲ್ಲಿ ಅಲ್ಲದೆ, ನನ್ನ ಖುಷಿಗೆ ನಾನು ಓದುವಂತಹ ಮುಕ್ತವಾತಾವರಣದಲ್ಲಿಯೂ ಕಲಿತಿದ್ದೇನೆ.

ಆದರೆ ಜಪಾನೀಸ್ ಭಾಷೆಯನ್ನು ತರಗತಿಗಾಗಿ ರಚಿಸಿದ ವಾತಾವರಣದಲ್ಲಿ ಮಾತ್ರ ಕಲಿತಿದ್ದೇನೆ. ತರಗತಿಯ ಆಚೆಗೆ ಆ ಭಾಷೆಯ ವಿಶಾಲರೂಪದ ಸಂವೇದನೆಗಳಿಗೆ ತೆರೆದುಕೊಂಡಿಲ್ಲ. ಈ ಕಲಿಕೆ ನನಗೆ ಜಪಾನೀಸ್ ಭಾಷೆಯ ಸದೃಢ ಅರಿವನ್ನು ನೀಡಿದ್ದರೂ ಆ ಭಾಷೆಯಲ್ಲಿ ಹೊಸ ಪ್ರಯೋಗಗಳನ್ನು ನಡೆಸುವ ಸಾಮರ್ಥ್ಯವನ್ನು ಮಿತಿಗೊಳಿಸಿದೆ. ತರಗತಿಯಾಚೆಗೆ ಮಹತ್ವಪೂರ್ಣವೆನಿಸುವ ತೆರೆದುಕೊಳ್ಳುವಿಕೆ ಸಿಗುವವರೆಗೂ ನನಗೆ ಈ ಮಿತಿ ಇರುತ್ತದೆ, ಇದರ ಅರ್ಥ ನನ್ನ ಜಪಾನೀಸ್ ಅಪರಿಪೂರ್ಣವಾಗಿರುತ್ತದೆ ಎಂದಲ್ಲ. ಅನೇಕ ಸಂದರ್ಭ ಗಳಲ್ಲಿ ಜಪಾನೀಸ್ ಭಾಷೆಯ ನನ್ನ ಸದೃಢ ಅರಿವು ಅಗತ್ಯವಾಗುತ್ತದೆ.

ಹಾಗೆ ನೋಡಿದರೆ ತಮಿಳು ಭಾಷೆಯೊಂದಿಗಿನ ನನ್ನ ಅನುಭವ ಜಪಾನೀ ಭಾಷೆಯ ಅನುಭವಕ್ಕೆ ಸಂಪೂರ್ಣ ತದ್ವಿರುದ್ಧ. ವ್ಯವಸ್ಥಿತವಾದ ಯಾವುದೇ ಶಿಕ್ಷಣವಿಲ್ಲದಿದ್ದರೂ ನಾನು ಹುಟ್ಟಿದಾಗಿನಿಂದ ತಮಿಳು ಮನೆಯವರೊಡನೆ ನಡೆಯುವ ಸಂಭಾಷಣೆಗಳ ಮೂಲಕ ನನ್ನ ಕಿವಿಗೆ ಬೀಳುತ್ತಾ ಬಂದಿದೆ . ಅದರಿಂದ ಕೊಂಚವಾದರೂ ಪರಿಣಾಮಕಾರಿಯಾಗಿ ತಮಿಳು ಕಲಿಯುವುದರ ಬಗ್ಗೆ ನಾನು ಯೋಚಿಸಬಲ್ಲೆ . ನಿಜವಾಗಿ ಹೇಳಬೇಕೆಂದರೆ ಇದೇ ನನ್ನ ಮುಂದಿನ ಗುರಿ . ಜಪಾನೀಸ್ ಭಾಷೆ ಕಲಿಯುವಾಗ ಪಡೆದುಕೊಂಡ ಕೌಶಲ್ಯಗಳನ್ನೇ ಇಲ್ಲಿಯೂ ಬಳಸಿ ತಮಿಳನ್ನು ಕೊಂಚ ವ್ಯವಸ್ಥಿತವಾಗಿ ಕಲಿಯಬೇಕೆಂಬುದು . ನನಗೆ ಮಾತೃಭಾಷೆಯಂಥದ್ದೇ ನಂಟು ತಮಿಳಿನ ಜೊತೆಗಿರುವುದರಿಂದ , ಮುಂದೆಂದಾದರೂ ಒಂದು ದಿನ ನನ್ನ ತಮಿಳು ಭಾಷಾ ಜ್ಞಾನ ನನ್ನ ಇಂಗ್ಲಿಷ್ ಭಾಷಾಜ್ಞಾನವನ್ನು ಸರಿಗಟ್ಟಬಹುದೆಂಬುದೇ ನನ್ನ ಆಸೆ. ಮೂರು ಭಾಷೆಗಳ ಸಾಮಾನ್ಯ ಜ್ಞಾನದಿಂದ ಒಂದು ಭಾಷೆಯನ್ನು ಕಲಿಯಲು ಸಾಧ್ಯವಾಗುತ್ತದೆ ಎಂದರೆ ಮೂರು ಭಾಷೆಗಳ ಉತ್ತಮ ಜ್ಞಾನ ಇನ್ನೂ ಹೆಚ್ಚು ಭಾಷೆಗಳನ್ನು ಕಲಿಯಲು ಸಹಕಾರಿಯಾಗಬಲ್ಲದು ಅಲ್ಲವೇ?

ಅಶ್ವಿನ್ ಶ್ರೀವತ್ಸ ಅವರು ಕಲಿಕೆಗೆ ಕೊನೆಯಿಲ್ಲವೆಂದು ನಂಬಿರುವ ಓರ್ವ ವಿದ್ಯಾರ್ಥಿ;; ಗಣಿತ, ಸಂಗೀತ , ವಿಜ್ಞಾನ ಹಾಗೂ ಜಪಾನೀಸ್ ಭಾಷೆಯ ಮೇಲೆ ವಿಶೇಷ ಆಸಕ್ತಿಯುಳ್ಳ ಪ್ರತಿಭಾಶಾಲಿ . ತನ್ನ ಕಲಿಕೆಯ ವೇಗವನ್ನು ಹೆಚ್ಚಿಸಲು ಅಶ್ವಿನ್ ಅವರು ತನ್ನ ಶಾಲೆಯಿಂದಲೂ ಹಾಗು ಸ್ಟ್ಯಾನ್ ಫೋರ್ಡ್ ವಿಶ್ವವಿದ್ಯಾಲಯದ ಪ್ರತಿಭಾಶಾಲಿ ವಿದ್ಯಾರ್ಥಿಗಳಿಗೆಂದೇ ಇರುವ ಶೈಕ್ಷಣಿಕ ಕಾರ್ಯಕ್ರಮ ಮತ್ತು ನಾರ್ತ್ ವೆಸ್ಟರ್ನ್ ವಿಶ್ವವಿದ್ಯಾಲಯದ ಪ್ರತಿಭಾ ಕೇಂದ್ರದ ಉನ್ನತ ನಿಗದಿತ ಪಾಠಕ್ರಮದ ವರ್ಗವನ್ನೇ ಆಯ್ದುಕೊಂಡಿದ್ದಾರೆ . ೨೦೦೯ ರ ಚಳಿಗಾಲದಲ್ಲಿ ಅಶ್ವಿನ್ ಅವರು ಓಹಿಯೋದಲ್ಲಿರುವ ಸಿನ್ಸಿನ್ನಾಟಿಯ ಸೈಕಮೋರ್ ಪ್ರೌಢ ಶಾಲೆಯ ಕೊನೆಯ ವರ್ಷವನ್ನು ಶುರುಮಾಡುತ್ತಾರೆ . ಕಲಿಯಲಿಕ್ಕೆಂದೇ ಓದಲು ಇಷ್ಟಪಡುವ ಅತ್ಯಾಸಕ್ತಿಯ ಈ ಓದುಗ , ತುಂಬು ಹೃದಯದಿಂದ ನಗುವುದನ್ನು ಬಹಳ

ಇಷ್ಟಪಡುತ್ತಾರೆ ಹಾಗು ಪ್ರತೀ ವರ್ಷ ರಜೆಯನ್ನು ಕಳೆಯಲು ಭಾರತಕ್ಕೆ ಬರುತ್ತಾರೆ. ನೀವು ಅಶ್ವಿನ್ ಅವರನ್ನು ಈ ಮಿಂಚಂಚೆಯ ಮೂಲಕ ಸಂಪರ್ಕಿಸಬಹುದು – ashvin.21@gmail.com